ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ರಸ್ತೆಗಳ ದುಸ್ಥಿತಿ ಬಗ್ಗೆ

ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು ) :-

685 (791) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೆಂಗಳೂರು ನಗರದ ತುಮಕೂರು ರಸ್ತೆ ಮಾದನಾಯಕನಹಳ್ಳಿ ಗ್ರಾಮದಿಂದ ಕುದುರೆಗೆರೆ, ಸಾಸವೆಘಟ್ಟ, ಕುಂಬಾರಹಳ್ಳಿ ಮುಖಾಂತರ ಹಾದು ಹೋಗಿ ಹೆಸರಘಟ್ಟ ಸಂಪರ್ಕ ಕಲ್ಪಿಸುವ ರಸ್ತೆಯು ಮತ್ತು ಬೆಂಗಳೂರು ನಗರದ ಕಡಬಗೆರೆ ಗ್ರಾಮದಿಂದ ಲಕ್ಷ್ಮೀಪುರ, ಬಿನ್ನಮಂಗಲ, ವಡ್ಡರಹಳ್ಳಿ ಮುಖಾಂತರ ಹಾದು ಹೋಗಿ ಮಾದನಾಯಕನಹಳ್ಳಿ-ತುಮಕೂರು ರಸ್ತೆಗೆ ಸಂಪರ್ಕ ಕಲ್ಪಿಸುವ ರಸ್ತೆಯು ಹಾಳಾಗಿ ಸಾರ್ವಜನಿಕ ವಾಹನ ಸಂಚಾರಕ್ಕೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಬಂದಿದ್ದಲ್ಲಿ ಸದರಿ ರಸ್ತೆಗಳಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ವತಿಯಿಂದ ಕಳೆದ ಹತ್ತು ವರ್ಷಗಳಲ್ಲಿ ಡಾಂಬರೀಕರಣ/ಕಾಂಕ್ರೀಟ್‌ಕರಣ ಮಾಡಿದ ಕಾಮಗಾರಿಗಳ ಸಂಪೂರ್ಣ ಮಾಹಿತಿ ನೀಡುವುದು;

(ಇ) ಸದರಿ ರಸ್ತೆಗಳನ್ನು ಸುಸ್ಥಿತಿಗೆ ತರಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು)